# ಪಂಚಮ

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕದಬ್ಬಾಳಿಕೆಯ ವಿರುದ್ಧ ಶೋಷಣೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ.

ವಾರ್ಷಿಕ ಚಂದಾ 5 ರೂ. ಗಳು

ಸಂಪುಟ : 3 ಸಂಚಿಕೆ : 11–12 5, ಜುಲೈ 1979 ಪಾಕ್ಷಿಕ ಬೆಲೆ : 20 ಪೈಸೆ


# ತಮಿಳುನಾಡಿನಲ್ಲಿ ಐವರು ದಲಿತರ ಕೊಲೆ

ತಮಿಳುನಾಡಿನ ರಾಮನಾಥಪುರಂ ಜಿಲ್ಲೆಯ ಉಂಜನೈ ಗ್ರಾಮದಲ್ಲಿ ಜೂನ್ 28 ರಂದು ಮುಂಜಾನೆ ಸವರ್ಣೀಯ ಬಲಿಷ್ಠ ಕೋಮು 'ದೇವರ್' ಜಾತಿಯ ಸುಮಾರು 500 ಜನರು ಚಾಕು, ಚೂರಿ, ಹಾರೆ ಮುಂತಾದ ಮಾರಕ ಅಸ್ತ್ರಗಳೊಡನೆ ಹರಿಜನರ ಮೇಲೆ ನಡೆಸಿದ ದೌರ್ಜನ್ಯದಿಂದ ಐವರು ಕೊಲೆಯಾದರು. ಚಾಕು, ಚೂರಿ ಏಟುಗಳಿಗೆ ಸಿಕ್ಕಿದವರಲ್ಲಿ 56 ಮಂದಿ ಹರಿಜನರು ತೀವ್ರವಾಗಿ ಗಾಯಗೊಂಡಿದ್ದಾರೆ. ಅಲ್ಲದೆ ಹರಿಜನ ಕೇರಿಯ ಬಹುತೇಕ ಗುಡಿಸಲುಗಳಿಗೆ ಬೆಂಕಿಹಚ್ಚಿ ನಾಶಪಡಿಸಲಾಗಿದೆ.

**ದೌರ್ಜನ್ಯದ ಹಿನ್ನಲೆ**

ಉಂಜನೈ ಗ್ರಾಮದ ಐಯ್ಯನಾರ್ ದೇವಾಲಯದಲ್ಲಿ ಪ್ರತಿವರ್ಷ ಮಣ್ಣಿನಿಂದ ರಚಿಸಿದ ಕುದುರೆಯನ್ನಿಟ್ಟು ಉತ್ಸವ ನಡೆಸುವುದು ಅಲ್ಲಿಯ ಧಾರ್ಮಿಕ ಸಂಪ್ರದಾಯ. ಇದು ಕೇವಲ 'ದೇವರ್' ಗಳಿಗೆ ಮಾತ್ರ ಮೀಸಲಾಗಿತ್ತು. ಈ ಕ್ರಮವನ್ನು 15 ವರ್ಷಗಳ ಹಿಂದೆಯೇ ಹರಿಜನರು ವಿರೋಧಿಸಿ ಪ್ರತಿಭಟಿಸಿದ್ದರಿಂದ ಕಳೆದ 13 ವರ್ಷಗಳಿಂದ ಈ ಉತ್ಸವ ನಿಂತುಹೋಗಿತ್ತು.

ಇತ್ತೀಚೆಗೆ ರಾಮನಾಥಪುರಂ ಜಿಲ್ಲಾಧಿಕಾರಿಗಳು ಎರಡು ಜಾತಿಗಳ ಮುಖಂಡರ ನಡುವೆ ಈ ಸಂಬಂಧದಲ್ಲಿ ಒಂದು ಒಪ್ಪಂದ ಏರ್ಪಡಿಸಿದ್ದರು. ಒಪ್ಪಂದದ ಪ್ರಕಾರ ಉತ್ಸವವನ್ನು ಮೊದಲು 'ದೇವರ್'ಗಳು ನಂತರ ಹರಿಜನರು ಆಚರಿಸುವಂತೆ ತೀರ್ಮಾನವಾಯಿತು. ಅಂತೆಯೇ ಮೊದಲು 'ದೇವರ್'ಗಳು ಉತ್ಸವವನ್ನು ಆಚರಿಸಿದರು. ಜುಲೈ 1ರಂದು ಹರಿಜನರು ಉತ್ಸವ ಆಚರಣೆಗೆ ಸಿದ್ಧತೆ ನಡೆಸುತ್ತಿದ್ದರು.

**ತಡೆಆಜ್ಞೆ ತಂದರು**

ಹರಿಜನರು ಉತ್ಸವ ನಡೆಸುವುದರಿಂದ ತಮ್ಮ ಪ್ರತಿಷ್ಠೆಗೆ ಕುಂದು ಎಂದು ಭಾವಿಸಿದ 'ದೇವರ್' ಗಳು ತತ್‌ಕ್ಷಣವೇ ಜಿಲ್ಲಾಧಿಕಾರಿಗಳ ತೀರ್ಮಾನದ ವಿರುದ್ಧ ಹರಿಜನರು ಉತ್ಸವ ನಡೆಸದಂತೆ ನ್ಯಾಯಾಲಯದಿಂದ ತಡೆ ಆಜ್ಞೆ ತಂದರು. ಈ ವಿವಾದ ಈಗ ನ್ಯಾಯಾಲಯದಲ್ಲಿ ವಿಚಾರಣೆ ಆಗುತ್ತಿದೆ.

[ಕಡೆಯ ಪುಟ ನೋಡಿ]

## ಮೂಡಿಗೆರೆ ಬಳಿ ಕೊಲೆ

ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನ ಕನಚೂರು ಗ್ರಾಮದಲ್ಲಿ ಜೂನ್ 12 ರಂದು 25 ವರ್ಷದ ಹರಿಜನ ಯುವಕನೊಬ್ಬನನ್ನು ಕೇರಳದ ಮೂವರು ಚೂರಿಯಿಂದ ಇರಿದು ಕೊಂದರೆಂದು ವರದಿಯಾಗಿದೆ.

# ಬಿಹಾರ : ಮತ್ತೊಂದು ಹತ್ಯಾಕಾಂಡ

ಬೆಲ್ಚಿ, ಬಿಸರಾಂಪುರ, ಬಜಿತ್‌ಪುರ, ಕೈಲಾಗಳಲ್ಲಿ ನಡೆದ ದಲಿತರ ಕಗ್ಗೊಲೆಗಳು ಮಾಸುವಷ್ಟರಲ್ಲೇ ಸಮಾಹುಟ ಎಂಬಲ್ಲಿ ಮತ್ತೊಂದು ದಲಿತರ ಘೋರ ಹತ್ಯಾಕಾಂಡ ಇತ್ತೀಚೆಗೆ ನಡೆದಿದೆ. ಬಿಹಾರದಲ್ಲಿ ಬದುಕೇ ಒಂದು ಸವಾಲಾಗಿರುವ ದಲಿತರಿಗೆ ಭೂಮಾಲೀಕರ ಶಸ್ತ್ರಗಳ ಭೀಕರತೆ ಕ್ಷಣ ಕ್ಷಣವೂ ಬಾಧಿಸುತ್ತಿದೆ.

ಉತ್ತರ ಪ್ರದೇಶದ ಗಡಿಯಲ್ಲಿರುವ ಬಿಹಾರದ ರೋಹಟ್ಷ್ ಜಿಲ್ಲೆಯ ಸಮಾಹುಟ ಗ್ರಾಮದಲ್ಲಿ ಜೂನ್ 22 ರಂದು ರಾತ್ರಿ ಸಶಸ್ತ್ರ ಪೋಲೀಸ್ ಸಿಬ್ಬಂದಿ ಮತ್ತು 22 ಮಂದಿ ಭೂಮಾಲೀಕರು ತಮ್ಮ ಗೂಂಡಾಗಳೊಡನೆ ಹರಿಜನಕೇರಿಯ ಮೇಲೆ ದಾಳಿ ಎಸಗಿ ನಾಲ್ವರನ್ನು ಗುಂಡಿಟ್ಟು ಕೊಂದರೆಂದು ವರದಿಯಾಗಿದೆ.

ಸಮಾಹುಟ ಗ್ರಾಮದ ದಲಿತರಿಗೆ ಭೀಕರ ನರಕ ದೃಶ್ಯ ಗೋಚರವಾದ ಅಂದು ಸಮರಾತ್ರಿ ಸಶಸ್ತ್ರಗಳನ್ನು ಹೊಂದಿದ್ದ ಪೋಲೀಸ್ ಮತ್ತು ಭೂಮಾಲೀಕರು ತಮ್ಮ ಶತ್ರುಗಳೆಂದು ಕಂಡಿದ್ದ ಇಬ್ಬರು ಹರಿಜನರನ್ನು ಗುಂಡಿಟ್ಟು ಕೊಂದರು. ಮೊದಲನೇ ಸುತ್ತಿನ ಗುಂಡೇಟಿಗೆ ಬಲಿಯಾದ ಈ ಇಬ್ಬರಲ್ಲಿ ನಿರ್ಗತಿಕ ಕುಟುಂಬವೊಂದಕ್ಕೆ ಜೀವ

[4ನೇ ಪುಟ ನೋಡಿ]

## ಆಕೆ ಈಗ ನಿಜವಾಗಿಯೂ ಸತ್ತಳು

ದಿನನಿತ್ಯ ಹಸಿವಿನಿಂದ ಸತ್ತೂ ಸತ್ತೂ ಬದುಕಿದ್ದ ತುರುವೇಕೆರೆ ಬಳಿಯ ಪುಟ್ಟಮಾರಿಹಳ್ಳಿಯ ಹರಿಜನ ಮಹಿಳೆ 15 ದಿನಗಳ ಬಾಣಂತಿ ಚಿಕ್ಕಮ್ಮ (25), ಮತ್ತು ಆಕೆಯ ಹಸುಗೂಸು ಹಸಿವಿನಿಂದ ಕಳೆದ ತಿಂಗಳು ಅಸುನೀಗಿದರೆಂದು ವರದಿಯಾಗಿದೆ.

ಹಸಿವಿನಿಂದ ಸತ್ತ ಆಕೆ ಮತ್ತು ಮಗುವಿನ ಶವಗಳು 'ಸಮಾನ ಸ್ವಾತಂತ್ರ್ಯವುಳ್ಳ' ಈ ದೇಶದ ಜನರ ಕಣ್ಣಿಗೆ ಇತ್ತೀಚೆಗೆ ಕಾಣಸಿಕೊಂಡವು.

ಆಕೆ ನಿರ್ಗತಿಕಳಾಗಿದ್ದು ಜೀವನಾಧಾರಕ್ಕೆ ಏನೂ ಇರಲಿಲ್ಲವೆಂದು ಹೇಳಲಾಗಿದೆ.

## ದಲಿತ ನುಡಿ

ನಮ್ಮ ಹಕ್ಕುಗಳನ್ನು ಅನ್ಯಾಯವಾಗಿ ಅಪಹರಿಸಿದವರಿಂದ ಪುನಃ ಪಡೆಯಲು ಯಾಚನೆ, ಬೇಡಿಕೆ, ವಿನಂತಿಗಳಿಂದ ಪ್ರಯೋಜನವಿಲ್ಲ. ಅದಕ್ಕೆ ಅವಿಶ್ರಾಂತವಾದ ಹೋರಾಟವೊಂದೇ ಮಾರ್ಗ.

—ಅಂಬೇಡ್ಕರ್

---

## ಓದುಗರ ಪತ್ರ

---

### ಶಾಲಾ-ಕಾಲೇಜುಗಳಲ್ಲಿ ದಲಿತ ವಿದ್ಯಾರ್ಥಿಗಳಿಂದ ಅಕ್ರಮ ಶುಲ್ಕ ಸುಲಿಗೆ

ಮಾನ್ಯರೆ,

ಬೆಂಗಳೂರು ಮತ್ತಿತರ ಊರುಗಳ ಶಾಲಾ ಕಾಲೇಜುಗಳಲ್ಲಿ ಎಂದಿನಂತೆ ಈ ವರ್ಷವೂ ಹರಿಜನರಿಗೆ ಕಿರುಕುಳ ದಕೆಲಸಗಳು ನಡೆಯುತ್ತಿವೆ. ದಲಿತರ ವ್ಯಾಸಂಗಕ್ಕೆ ಅನುಕೂಲವಾಗಲೆಂಬ ಕಾನೂನು ಕೇವಲ ಕಾಗದದಲ್ಲೇ ಕೊಳೆಯುತ್ತಿರುವುದು ವಿಷಾದದ ಸಂಗತಿ. 1968 ಮತ್ತು 1972 ರಲ್ಲಿ ಹರಿಜನ, ಗಿರಿಜನ ವಿದ್ಯಾರ್ಥಿಗಳಿಗೆ ಶಾಲಾ, ಕಾಲೇಜುಗಳ ಪ್ರವೇಶ ಶುಲ್ಕದಲ್ಲಿ ವಿನಾಯಿತಿ ನೀಡಲಾಗಿದೆ. ಅಲ್ಲದೆ ಇವರಿಂದ ಯಾವುದೇ ರೀತಿಯ ಡೊನೇಷನ್ ಪಡೆಯುವಂತಿಲ್ಲ. ಆದರೆ ಬೆಂಗಳೂರಿನ ಅನೇಕ ಖಾಸಗಿ ಕಾಲೇಜುಗಳಲ್ಲಿ ಹರಿಜನ, ಗಿರಿಜನ ವಿದ್ಯಾರ್ಥಿಗಳಿಂದ ಕಡ್ಡಾಯವಾಗಿ ಡೊನೇಷನ್ ಪಡೆಯುತ್ತಿದ್ದಾರೆ. ಡೊನೇಷನ್ ಕೊಡದಿದ್ದರೆ ಪ್ರವೇಶವನ್ನೇ ನಿರಾಕರಿಸುತ್ತಿದ್ದಾರೆ. ಅಂತೆಯೇ ಅನೇಕ ಕಾರಣಗಳನ್ನು ಮುಂದಿಟ್ಟು ಸರ್ಕಾರಿ ಕಾಲೇಜುಗಳಲ್ಲೂ ಅಧಿಕವಾಗಿ ಫೀ ವಸೂಲಿ ಮಾಡಲಾಗುತ್ತಿದೆ.

ಸರ್ಕಾರ ಇದನ್ನು ಗಮನಿಸಿ ಹರಿಜನ-ಗಿರಿಜನರ ಅಭಿವೃದ್ಧಿಗೆಂದು ಮಾಡಿರುವ ಕಾನೂನುಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ಕ್ರಮತೆಗೆದುಕೊಳ್ಳಬೇಕೆಂದು ಈ ಮೂಲಕ ಕೇಳಿಕೊಳ್ಳುತ್ತೇನೆ.

—ದೊಡೆಲ್ಲಪ್ಪ
ಹೊಸಕೋಟೆ.

### ಅಸ್ಪೃಶ್ಯರಲ್ಲೇ 'ಅಸ್ಪೃಶ್ಯತೆ' ಆಚರಣೆ

ಮಾನ್ಯರೆ,

ತುರುವೇಕೆರೆ ತಾಲ್ಲೂಕು ಮಲ್ಲೇನಹಳ್ಳಿಯಲ್ಲಿ ಸವರ್ಣೀಯರು ಸೇರಿದಂತೆ 15 ಕುಟುಂಬ ಆದಿದ್ರಾವಿಡರು ಮತ್ತು 2 ಕುಟುಂಬ ಆದಿಕರ್ನಾಟಕದವರಿದ್ದೇವೆ. ಆದಿದ್ರಾವಿಡ ಮತ್ತು ಆದಿಕರ್ನಾಟಕದ ಜನರಿಗೆ ಸುಮಾರು ವರ್ಷಗಳಿಂದ ಸಾರ್ವಜನಿಕ ಬಾವಿಯೊಂದಿದೆ. ಆದರೆ ಈ ಬಾವಿಯಲ್ಲಿ ಪರಿಶಿಷ್ಟ ವರ್ಗಕ್ಕೇ ಸೇರಿದ ನಾವು ಅಂದರೆ ಆದಿಕರ್ನಾಟಕ ಪಂಗಡದವರು ಅಲ್ಲಿ ನೀರು ತೆಗೆದುಕೊಳ್ಳುವಂತಿಲ್ಲ.

ಸವರ್ಣೀಯರ ಜತೆಗೂಡಿ ನಮ್ಮ ಸೋದರ ಪಂಗಡದವರಾದ ಆದಿದ್ರಾವಿಡರು ನಾವು ನೀರು ತೆಗೆದುಕೊಳ್ಳದಂತೆ ಕಿರುಕುಳಕೊಡುತ್ತಿದ್ದಾರಲ್ಲದೆ ನಮ್ಮಲ್ಲೇ ಅಸ್ಪೃಶ್ಯತೆ ಆಚರಿಸುತ್ತಿರುವುದು ದುಃಖಕರ ವಿಷಯ.

ಬಾವಿ ಹತ್ತಿರದಲ್ಲಿದ್ದರೂ ನಾವು ಕುಡಿಯುವ ನೀರಿಗಾಗಿ ಊರಿನಾಚೆಯ ಹಳ್ಳಕೊಳ್ಳ, ಕೆರೆಗಳಿಂದ ಹೊತ್ತು ತರಬೇಕು. ಬೇಸಿಗೆ ಕಾಲದಲ್ಲಿ ಅಲ್ಲಿ ನೀರು ದೊರೆಯದ ಕಾರಣ ಕಳೆದ ಎರಡು ವರ್ಷದಿಂದ ಗ್ರಾಮ ಪಂಚಾಯಿತಿಯಿಂದ ಅನುಮತಿ ಪಡೆದು ಅದೇ ಬಾವಿಯಲ್ಲಿ ನೀರು ತೆಗೆಯಲು ಆರಂಭಿಸಿದೆವು. ಆದ್ದರಿಂದ ನಮ್ಮ ಸೋದರ ಪಂಗಡದವರಾದ ಆದಿದ್ರಾವಿಡರು ಆ ಬಾವಿಯನ್ನೇ ಅಸ್ಪೃಶ್ಯವನ್ನಾಗಿಕಂಡರು. ನಾವು ನೀರು ತೆಗೆಯದಂತೆ ಸವರ್ಣೀಯರ ಜತೆಗೂಡಿ ಇಲ್ಲ ಸಲ್ಲದ ಕಿರುಕುಳ ಕೊಡಲು ಆರಂಭಿಸಿದರು. ಮನೆಗೆ ಬೆಂಕಿ ಹಚ್ಚುವುದಾಗಿ ಮತ್ತು ಕೊಲೆ ಬೆದರಿಕೆಗಳನ್ನು ಹಾಕಿದರು. ವಿನಾಕಾರಣ ದಂಡ ಹಾಕುವ ಕೆಲಸ ಮುಂದುವರಿಸಿದ್ದಾರೆ.

ನಮ್ಮ ಗ್ರಾಮದಲ್ಲಿ ಎರಡೇ ಕುಟುಂಬವಿರುವ ನಾವು ಭಯಭೀತಿಗಳಿಂದ ಬದುಕಬೇಕಾಗಿದೆ. ಆದ್ದರಿಂದ ಈ ಆತಂಕ ತೊಲಗಿಸಲು ದಲಿತರಿಗಾಗಿಯೇ ಇರುವ ಸಾರ್ವಜನಿಕ ಬಾವಿಯಲ್ಲಿ ನೀರು ತೆಗೆಯುವ ಮೂಲಕ ನಮ್ಮ ಸೋದರ ಪಂಗಡದವರಾದ ಆದಿದ್ರಾವಿಡರೊಡಗೂಡಿ ಸಹಬಾಳ್ವೆಯನ್ನು ಬಯಸಿರುವ ನಮಗೆ ಎಚ್ಚೆತ್ತ ದಲಿತರು ನೆರವು ನೀಡಬೇಕೆಂದು ಈ ಮೂಲಕ ಕೋರುತ್ತೇವೆ.

ಮಲ್ಲೇನಹಳ್ಳಿ —ನಿಂಗಯ್ಯ
ಬೆಟ್ಟಯ್ಯ

## ಹತ್ತೂ ಸುತ್ತಿನಿಂದ

ದಬ್ಬಾಳಿಕೆಯ ಮುಂದೆ ತಲೆತಗ್ಗಿಸುವವರು ತಮ್ಮ ಜೀವನದಲ್ಲಿ ಎಂದೂ ಮುಂದೆ ಬರಲಾರರು.

—ಜಗಜೀವನರಾಂ

ಹರಿಜನರ ವಿರುದ್ಧದ ದಬ್ಬಾಳಿಕೆಯನ್ನು ಅಮೆರಿಕಾದಲ್ಲಿನ ನೀಗ್ರೋ-ಬಿಳಿಯರ ಸಮಸ್ಯೆಗೆ ಹೋಲಿಸಲಾಗದು. ಏಕೆಂದರೆ ಬ್ರಾಹ್ಮಣರು ಮತ್ತು ಭಂಗಿಗಳು ಒಂದೇ ಸಂತತಿಗೆ ಸೇರಿದವರು.

—ಜಗಜೀವನರಾಂ

ದೇವಾಲಯಗಳ ಜೀರ್ಣೋದ್ಧಾರದಿಂದ ದೇಶೋದ್ಧಾರ ಇಲ್ಲ.

—ಬಿ. ಬಸವಲಿಂಗಪ್ಪ.

ದೇಶಾದ್ಯಂತ ಹರಿಜನರ ಮೇಲೆ ನಡೆದ ದೌರ್ಜನ್ಯಗಳಲ್ಲಿ ಹೆಚ್ಚು ಪ್ರಕರಣಗಳು ದಾಖಲಾಗಿರುವುದು ಬಿಜಾಪುರ ಜಿಲ್ಲೆಯಲ್ಲಿ.

—ಚಂದೂಲಾಲ್.
ಡಿ. ಐ. ಜಿ.

ನ್ಯಾಯಾಲಯವೇ ದೇಗುಲ, ನ್ಯಾಯಾಧೀಶರೇ ದೇವರು ಎನ್ನುವ ಕಾಲ ಹೊರಟು ಹೋಯಿತು. ಏಕೆಂದರೆ ನ್ಯಾಯಾಲಯದಲ್ಲೇ ಹರಿಜನ-ಗಿರಿಜನರಿಗೆ ಶೇ. 18 ಮೀಸಲಾತಿ ಇಲ್ಲ.

—ಎಲ್. ಜಿ. ಹಾವನೂರು.

# ಗ್ರಾಮಾಭಿವೃದ್ಧಿ ಸಚಿವರ ಊರಿನಲ್ಲೇ ಹರಿಜನರಿಗೆ ಬೋರ್‌ವೆಲ್ ನೀರಿಗೆ ನಿಷೇಧ

● ಕೀರ್ತಿನಾರಾಯಣಸ್ವಾಮಿ

ಬೆಂಗಳೂರಿಗೆ ಸುಮಾರು 25 ಮೈಲಿ ದೂರವಿರುವ ನೆಲಮಂಗಲ ತಾಲ್ಲೂಕಿನ ಜಕ್ಕನಹಳ್ಳಿ ಒಂದು ಕುಗ್ರಾಮವಾದರು ಈ ಪಾಪಿಷ್ಟ ದೇಶದ ಹಳ್ಳಿಗಳಿಗೆ ಇರುವ ಅಷ್ಟಿಷ್ಟು ಸೌಕರ್ಯಗಳಿಂದೇನೂ ವಂಚಿತವಾಗಿಲ್ಲ. ಆದರೆ ಅಲ್ಲಿನ ಮನುಷ್ಯ–ಮನಷ್ಯರ ನಡುವಿನ ನಡವಳಿಕೆ ಸಂಬಂಧ ಅಮಾನವೀಯವಾದಂಥದ್ದು.

ಊರಿನಲ್ಲಿ ಸುಮಾರು 300 ಮನೆಗಳಿವೆ. ಇವುಗಳಲ್ಲಿ 30 ಮಾದಿಗರದು, 5 ಹೊಲೆಯರದು ಮಾತ್ರ ಇದ್ದು ಉಳಿದೆಲ್ಲ ಒಕ್ಕಲಿಗರದು. ಅಲ್ಪ ಸಂಖ್ಯಾತ ಹರಿಜನರು ಇಲ್ಲಿನ ನಾಗರೀಕ ಸೌಲಭ್ಯ

## ವಿಶೇಷ ವರದಿ

ಗಳಿಂದ ವಂಚಿತರು. ಅವರನ್ನು ಇತ್ತೀಚಿನ ವರ್ಷಗಳಲ್ಲಿ ಬಹು ಮುಖ್ಯವಾಗಿ ಕಾಡಿಸುತ್ತಿರುವ ಸಮಸ್ಯೆ ಕುಡಿವ ನೀರು.

### ಬಾವಿಯುಲ್ಲ ಕೊಚ್ಚೆ ಗುಂಡಿ

ಬೇಸಿಗೆಯಿಂದ ಬತ್ತಿರುವ ಹರಿಜನಕೇರಿಯ ಬಾವಿಯಲ್ಲಿದ್ದ ಅಲ್ಪಸ್ವಲ್ಪ ನೀರು ಈಗ ಹುಳುಗಳ ತಾಣವಾಗಿ ಕೊಳಚೆಗುಂಡಿಯಾಗಿದೆ. ಪಕ್ಕದ್ದ ಒಕ್ಕಲಗೇರಿಗೆ ಸೇರಿದಂತೆ ಬೋರ್‌ವೆಲ್ ಇದೆ.

ಆದರೆ ಇಲ್ಲಿ ಹರಿಜನರು ನೀರು ತೆಗೆದುಕೊಳ್ಳುವಂತಿಲ್ಲ. ಮೊದಲು ಬಾವಿಗೆ ಹುಳುಗಳು ಬಿದ್ದಾಗ ಕೆಲವು ದಿನಗಳು ಹರಿಜನರು ನೀರಿಗಾಗಿ ಬೋರ್‌ವೆಲ್‌ಗೆ ಬರಬೇಕಾಯಿತು. ಬಂದ ಕೂಡಲೇ ತಾವೇ ನೀರು ತೆಗೆದುಕೊಂಡು ಹೋಗುವ ಹಾಗಿರಲಿಲ್ಲ. ಬೋರ್‌ವೆಲ್‌ನಿಂದ ದೂರನಿಲ್ಲಬೇಕಾಯಿತು. ಕರುಣೆ, ಸಹಾನುಭೂತಿ ತೋರಿಸಿದಂತೆ ಸಿಟ್ಟಿನ ಬೈಗುಳಗಳಿಂದ ಒಕ್ಕಲಿಗರ ಹೆಂಗಸರು ಹರಿಜನರ ಕೊಡಗಳಿಗೆ ನೀರು ಹಾಕುತ್ತಿದ್ದರು. ಹೀಗೆ ಮುಂದುವರಿದಂತೆ ಒಕ್ಕಲಿಗ ಜಾತಿಯ ಹೆಂಗಸು-ಗಂಡಸು ಪಡ್ಡೆ ಹೈಕಳಾದಿಯಾಗಿ ಹರಿಜನರಿಗೆ ಮುಖ ಭಂಗವಾಗುವಂಥ ಬೈಗುಳಗಳ ಸುರಿಮಳೆ.

ಒಮ್ಮೆ ಹೀಗಾಯಿತು. ಯಾರೂ ಇಲ್ಲದ ಸಮಯದಲ್ಲಿ ನೀರಿಗೆ ಬಂದ ಹರಿಜನ ಮಹಿಳೆಯೊಬ್ಬಳು ಬೋರ್‌ವೆಲ್‌ನಿಂದ ತಾನೇ ನೀರು ತೆಗೆದುಕೊಳ್ಳ ಬೇಕಾಯಿತು. ಆಕೆ ಹಾಗೆಯೇ ಮಾಡಿದಳು. ಆದರೆ ಅಂದು ರಾತ್ರಿ ಆಕೆಗೆ ಆ ಊರಿನ ಒಕ್ಕಲಿಗರೆಲ್ಲ ಸಭೆಸೇರಿ ಪಂಚಾಯಿತಿಯಿಂದ ದಂಡವಿಧಿಸಿ ಬೋರ್‌ವೆಲ್‌ನಿಂದ ನೀರು ತೆಗೆದುಕೊಳ್ಳದಂತೆ ಹರಿಜನರಿಗೆ ನಿಷೇಧಿಸಲಾಯಿತು.

ಒಕ್ಕಲಿಗರ ಯಾವ ದಬ್ಬಾಳಿಕೆಯನ್ನೂ ಎದುರಿಸಲಾರದ ಅಸಮರ್ಥ ಹರಿಜನರು ಅಂದಿನಿಂದ ಈಗ ಊರಿನಾಚೆಯ ಬಹುದೂರದ ಹಳ್ಳವೊಂದರಿಂದ ನೀರು ತರುತ್ತಿದ್ದಾರೆ. ನಾನು ಇತ್ತೀಚೆಗೆ ಆ ಊರಿಗೆ ಹೋಗಿದ್ದಾಗ ಈ ದೃಶ್ಯ ಕಂಡೆ. ಹರಿಜನ ಮಹಿಳೆಯೊಬ್ಬಳು ಹಳ್ಳವೊಂದರಿಂದ ನೀರು ತರುತ್ತಿದ್ದುದನ್ನು ಕಂಡು ಕೇಳಿದೆ "ಏಕಮ್ಮ ಇಲ್ಲೇ ಬೋರ್‌ವೆಲ್ ಇದೆಯಲ್ಲ? ಅದಕ್ಕೆ ಆಕೆ ತಮ್ಮ ಕೇರಿಯಲ್ಲಿ ಹುಳುಬಿದ್ದಿರುವ ಬಾವಿ ಮತ್ತು ಬೋರ್‌ವೆಲ್ ನೀರಿನ ಕಥೆಯನ್ನು ವಿವರಿಸಿದಳು.

### ಅವರವರ ಕರ್ಮ

ಈ ಎಲ್ಲಾ ಕಿರುಕುಳದ ಬಗ್ಗೆ ಅಲ್ಲಿನ ಒಕ್ಕಲಿಗರನ್ನಾಗಲಿ, ಗ್ರಾಮ ಪಂಚಾಯಿತಿಯವರನ್ನಾಗಲಿ, ಗ್ರಾಮಲೆಕ್ಕಿಗನನ್ನಾಗಲಿ ಕೇಳಿದರೆ ದೊರೆಯುವ ಉತ್ತರ "ಅವರೇ ಬೋರ್‌ವೆಲ್‌ಗೆ ಬರಲ್ಲ; ನಾವೇನ್ ಮಾಡೋಕಾಗುತ್ತೆ. ಅದೆಲ್ಲ ಅವರವರ ಕರ್ಮ". ಇದು ಆ ಊರಿನ ಜನಜೀವನದ ನಿಜ್ಜಳ ಸತ್ಯ.

ಜಕ್ಕನೂರು ಈ ರಾಜ್ಯದ ಗ್ರಾಮೀಣಾಭಿವೃದ್ಧಿ ಸಚಿವ ಹರಿಜನರಾದ ಕೆ. ಪ್ರಭಾಕರ್ ಅವರ ಹುಟ್ಟೂರು.

---

ರಾಜ್ಯದ ಮೂವರು ಹರಿಜನ ಮಂತ್ರಿಗಳಲ್ಲಿ ನಮಗೆ ವಿಶ್ವಾಸವಿಲ್ಲ. ಅವರಿಗೆ ಹರಿಜನರ ಬಗ್ಗೆ ಕೇಳೋ ಧೈರ್ಯ ಇಲ್ಲ.

—ವೈ. ರಾಮಕೃಷ್ಣ.

# ಕೊತ್ತೀಪುರದಲ್ಲಿ ದಲಿತರಿಗೆ ಸಾಮಾಜಿಕ ಬಹಿಷ್ಕಾರ

ವರದಿ : ಬಿ. ಜಿ. ಗಂಗಾಧರಯ್ಯ

ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ಕೊತ್ತೀಪುರ ಗ್ರಾಮದಲ್ಲಿ ದಲಿತರಾದ ವೆಂಕಟಪ್ಪನವರ ಮನೆಯವರು ಸರ್ಕಾರಿ ಬೋರ್‌ವೆಲ್‌ನಲ್ಲಿ ನೀರು ತೆಗೆದುಕೊಂಡಿದ್ದನ್ನು ಸಹಿಸದ ಊರಿನ ಸವರ್ಣೀಯರು ವೆಂಕಟಪ್ಪನವರ ಕುಟುಂಬದವರನ್ನೆಲ್ಲಾ ಹೀನಾಯವಾಗಿ ಬೈದು, ಹೊಡೆದು ಸಾಮಾಜಿಕ ಬಹಿಷ್ಕಾರ ಹಾಕಿದರು.

ಈ ಘಟನೆ ತಿಳಿದ ತಾಲ್ಲೂಕು ದಲಿತ ಸಂಘರ್ಷ ಸಮಿತಿ ಶಾಖೆಯ ಸದಸ್ಯರು 16-5-79 ರಂದು ಕುಣಿಗಲ್‌ನಲ್ಲಿ ಮೆರವಣಿಗೆ ತೆಗೆದು ತಹಸಿಲ್ದಾರರಿಗೆ ಮನವಿ ಸಲ್ಲಿಸಿ ದಲಿತರಿಗೆ ರಕ್ಷಣೆ ಕೊಡಬೇಕೆಂದೂ, ಬಡ ದಲಿತರ ಮೇಲೆ ದಬ್ಬಾಳಿಕೆ ನಡೆಸುತ್ತಿರುವ ಸವರ್ಣೀಯರಿಗೆ ಕಾನೂನಿನ ರೀತಿ ಶಿಕ್ಷೆಯಾಗಬೇಕೆಂದೂ ಒತ್ತಾಯಿಸಿದರು.

ತಹಸಿಲ್‌ದಾರರು ಈ ಮನವಿಯನ್ನು ಹಚ್ಚಿಕೊಳ್ಳದೆ ಸುಮ್ಮನಾದರು. ಇತ್ತ ಕೊತ್ತೀಪುರದಲ್ಲಿ ಬೋರ್‌ವೆಲ್ ನೀರು ತೆಗೆದುಕೊಂಡದಕ್ಕೇ ಸವರ್ಣೀಯರ ಆಕ್ರೋಶಕ್ಕೆ ಗುರಿಯಾಗಿದ್ದ ವೆಂಕಟಪ್ಪನವರ ಕುಟುಂಬದವರ ಮೇಲೆ ಮತ್ತೆ ಕಿರುಕುಳ ಆರಂಭವಾಯಿತು. ಸವರ್ಣೀಯ ಪಿಳ್ಳೀಯನ ಮಗ ವೆಂಕಟೇಗೌಡ ಮತ್ತು ಚಿಕ್ಕೋನು ಎಂಬುವರು ಇವರ ಇನಾಮತಿ ಜಮೀನನ್ನು ಅಕ್ರಮವಾಗಿ ಉಳುಮೆ ಮಾಡಿದರು. ಈ ಬಗ್ಗೆ ವೆಂಕಟಪ್ಪನು ತಾ. 5-6-79 ರಂದು ಪೋಲೀಸಿಗೆ ದೂರು ಕೊಡಲು, ಆಕ್ರಮಣಕಾರರನ್ನು ಅಧಿಕಾರಿಗಳು ನೆಪಮಾತ್ರಕ್ಕೆ ಸ್ಟೇಷನ್ನಿಗೆ ಕರೆತಂದು ಸುಮ್ಮನೆ ಬಿಟ್ಟರು.

ಸ್ಟೇಷನ್ನಿಗೆ ಹೋಗಿ ಬಂದ ಸವರ್ಣೀಯರು ಮಾರನೆ ದಿನ ಬೆಳಿಗ್ಗೆ ತಮ್ಮ ಗುಂಪಿನವರ ಜೊತೆಗೂಡಿ ತಮಗೆ ಅವಮಾನವಾಗಿದೆ ಎಂದು ಕೂಗಾಡುತ್ತಾ ಕೆರೆಯಿಂದ ನೀರು ತರುತ್ತಿದ್ದ ವೆಂಕಟಪ್ಪನ ಸೊಸೆಯನ್ನು ದಾರಿಯಲ್ಲಿ ಅಡ್ಡಗಟ್ಟಿ ಹಿಡಿದು ಹೊಡೆದಿರುತ್ತಾರೆ. ಮತ್ತು ಆ ಗುಂಪು ವೆಂಕಟಪ್ಪನ ಮನೆಗೆ ನುಗ್ಗಿ ಅವರ ಕುಟುಂಬದವರನ್ನೆಲ್ಲಾ ಹೊರಗೆ ಎಳೆತಂದು ಅಮಾನವೀಯವಾಗಿ ಥಳಿಸಿ

[ ಕಡೇ ಪುಟ ನೋಡಿ]

## ಗ್ರಾಮ ಸಮೀಕ್ಷೆ:

# ಬಾಣಾರಳ್ಳಿ ಕಡೆಗಣಿಸಲಾದ ಹರಿಜನರ ಕುಗ್ರಾಮ

● ಮನೋರಾಜ್ ಕುಟ್ಟಿ

ಬಾಣಾರಳ್ಳಿ ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲ್ಲೂಕಿನ ಒಂದು ಕಡೆಗಣಿಸಲ್ಪಟ್ಟ ಹಳ್ಳಿ. ಇದು ಹೊಸಕೋಟೆ ತಾಲ್ಲೂಕಿನ ಅಂಚಿನಲ್ಲಿದೆ. ಈ ಅಂಚು ದಾಟಿದರೆ ಮಾಲೂರು ತಾಲ್ಲೂಕಿನ ಹಳ್ಳಿಗಳು. ಈ ದೇಶದಲ್ಲಿ ಹರಿಜನರಷ್ಟೆ ಕಡೆಗಣಿಸಲ್ಪಟ್ಟವರಲ್ಲ. ಅವರು ವಾಸಿಸುವ ಹಳ್ಳಿಗಳೂ ಕೂಡ ಅಷ್ಟೇ ಕಾಲಕಸವಾಗಿ ಮೂಲೆ ಗುಂಪಾಗಿವೆ.

25 ಹರಿಜನ ಮನೆಗಳಿರುವ ಈ ಊರನ್ನು ದ್ವೀಪವೆಂದೇ ಕರೆಯಬಹುದು. ಕಲ್ಲುಗಳ ಮೇಲಿರುವ ಈ ಊರಿನ ಸುತ್ತಲೂ ಕೊಲ್ಲಿ ರೀತಿಯಲ್ಲಿ ಒಂದು ಉದ್ದವಾದ ಹಳ್ಳ ಇದೆ. ಈ ಊರು ಬಿಡಬೇಕಾದರೆ ಹಳ್ಳದಾಟಬೇಕು. ಮಳೆಗಾಲದಲ್ಲಿ ನೀರು ತುಂಬಿ ಹರಿಯುತ್ತದೆ. ಎರಡು ವರ್ಷದ ಹಿಂದೆ ಈ ಹಳ್ಳ ದಾಟಲು ಪ್ರಯತ್ನಿಸಿದ ಇಬ್ಬರು ನೀರಿನಲ್ಲಿ ಕೊಚ್ಚಿಕೊಂಡು ಹೋದರು. ಬೇಸಿಗೆ ಕಾಲದಲ್ಲಿ ಖಾಲಿಹಳ್ಳ. ಗಾಡಿಗಳಾಗಲಿ ಸೈಕಲ್‌ಗಳಾಗಲಿ ದಾಟಲಾಗುವುದಿಲ್ಲ. ಆದ್ದರಿಂದ ಈ ಊರಿನಲ್ಲಿ ಗಾಡಿಗಳನ್ನೇ ಯಾರೂ ಇಟ್ಟುಕೊಂಡಿಲ್ಲ.

**ಕಾಗದ ತಲುಪುವುದಿಲ್ಲ**

ಬಾಣಾರಳ್ಳಿಗೆ ಕಾಗದ ಬರೆದರೆ ಅದು ತಲುಪುವುದೇ ಇಲ್ಲ. ಪೋಸ್ಟ್‌ಮ್ಯಾನ್ 8 ಕಿ. ಮೀ. ನಡೆದು ಹಳ್ಳ ದಾಟಿ ಈ ಊರಿಗೆ ಬಂದು ಕಾಗದ ತಲುಪಿಸಬೇಕಾಗುತ್ತದೆ. ಒಂದು ಕಾಗದ ತಲುಪಿಸಲು ಹೋಗುತ್ತಾ ಬರುತ್ತಾ 16 ಕಿ. ಮೀ. ನಡೆದರೆ ಉಳಿದ ಕಾಗದಗಳನ್ನು ಬಟವಾಡೆ ಮಾಡಲು ನಮಗೆ ಸಮಯವೆಲ್ಲಿರುತ್ತದೆ ಎಂಬುದು ಅಂಚೆ ಕಚೇರಿಯವರ ಉತ್ತರ.

ಗವ್ವೆನಿಸುವ ಕತ್ತಲಲ್ಲಿ ಜನಜೀವನ. ಹೋದವರ್ಷ ಓಟು ಕೇಳುವುದಕ್ಕಂತ ಬಂದ ರಾಜಕಾರಣಿಗಳಿಗೆ ಈ ಊರಿನ ಜನ "ಯಾರು ನಮ್ಮೂರಿಗೆ ಲೈಟು ತರಿಸಿಕೊಡುತ್ತಾರೊ ಅವರಿಗೆ ಮಾತ್ರ ನಮ್ಮ ಎಲ್ಲಾ ಓಟು ಹಾಕುತ್ತೇವೆ. ಇಲ್ಲದಿದ್ದರೆ ಯಾರಿಗೂ ಓಟೇ ಹಾಕುವುದಿಲ್ಲ" ಅಂತ ಪಟ್ಟು ಹಿಡಿದರು. ಆಗ ರಾಜಕಾರಣಿಯೊಬ್ಬರು ಓಟು ಗಿಟ್ಟಿಸುವ ತಂತ್ರವಾಗಿ ಏಳು ಮರದ ಲೈಟು ಕಂಬಗಳನ್ನು ತರಸಿ ಊರಮುಂದೆ ಹಾಕಿ ಕೆಲಸ ಶುರು ಮಾಡಿಸುತ್ತೇವೆ ಅಂತ ನಂಬಿಕೆ ಹುಟ್ಟಿಸಿ ಓಟು ಗಿಟ್ಟಿಸಿಕೊಂಡು ಹೋದರು. ಹೋದ ಆಸಾಮಿ ಮತ್ತೆ ಈ ಕಡೆ ತಲೆ ಹಾಕಲಿಲ್ಲ. ಒಂದು ವರ್ಷದ ವರೆಗೂ ಆ ಕಂಬಗಳಿಂದ ಬರುವ ಬೆಳಕಿಗಾಗಿ ಕಂಬಗಳನ್ನು ಕಾದರು. ನಂತರ ಇದು ಓಟು ಗಿಟ್ಟಿಸಿದವನು ಮಾಡಿದ ಮೋಸ ಅಂತ ಗೊತ್ತಾಗಿ ಸುಮ್ಮನಾದರು. ಈಗ ಆ ಕಂಬಗಳು ಅಕ್ಕಪಕ್ಕದ ಊರುಗಳಲ್ಲಿ ಮದುವೆ ಚಪ್ಪರಗಳಿಗೆ ಆಸರೆಯಾಗಿ ಒಲೆಗೆ ಬೆಂಕಿಯಾಗಿ ಉರಿಯುತ್ತಿವೆ.

**ಓಟು-ಕಂದಾಯಕ್ಕೆ ಬರುತ್ತಾರೆ**

"ನಮ್ಮೂರಿಗೆ ರಾಜಕೀಯ ಪುಢಾರಿಗಳು ಅಧಿಕಾರಿಗಳು ಬರುವುದಿಲ್ಲ ಎಂದಲ್ಲ. ಓಟು ಮತ್ತು ಕಂದಾಯ ವಸೂಲಿಗೆ ಬಂದೇ ಬರುತ್ತಾರೆ. ಎಂಬುದು ಬಾಣಾರಳ್ಳಿ ಜನರ ನುಡಿ.

ಹಳ್ಳಕ್ಕೆ ಸೇತುವೆ ಕಟ್ಟಿಸಿ, ಲೈಟ್ ಹಾಕಿಸಿ ದಾರಿ ಮಾಡಿಸಿ ಅಂತ ಕೇಳಿಕೊಂಡ ಬೇಡಿಕೆಗಳಿಗೆ ಸರ್ಕಾರದಿಂದ ಈವರೆಗೆ ಯಾವ ಉತ್ತರವೂ ಇಲ್ಲ. ದಾರಿ ಇಲ್ಲದ ಊರಿನ ಈ ಹರಿಜನರು ಯಾವ ಸಮಸ್ಯೆಗಳಿಗೂ ಪರಿಹಾರದ ದಾರಿ ಕಾಣದೆ ಕಂಗಾಲಾಗಿದ್ದಾರೆ.

ಅಕ್ಕಪಕ್ಕದ ಬೇರೆ ಊರಿನ ಹಳ್ಳಿಗಳಲ್ಲಿ ಗಂಡಾಳಿನ ಕೂಲಿ 4 ರೂ. ಹೆಣ್ಣಾಳಿನ ಕೂಲಿ 3 ರೂ. ಆದರೆ ಈ ಊರಿಂದ ಬರುವ ಗಂಡಾಳಿಗೆ 3ರೂ. ಹೆಣ್ಣಾಳಿಗೆ 2ರೂ. ಕೊಡುತ್ತಾರೆ. ವರ್ಷದ ಹೆಚ್ಚು ಕಾಲಗಳು ಅವರು ಅಕ್ಕಪಕ್ಕದ ಊರುಗಳಿಗೆ ಕೂಲಿಗೆ ಹೋಗುತ್ತಾರೆ. ಇವರು ಯಾವಾಗಲೂ ಪಕ್ಕದ ಊರಿನ ಜಮೀನ್ದಾರರಿಗೆ ತಲೆ ಬಗ್ಗಿಸಿ ನಡೆಯಬೇಕು. ಏನಾದರೂ ತಲೆ ಎತ್ತಿದರೆ ತಲೆ ಒಡೆಯುತ್ತಾರೆ.

ಹರಿಜನರನ್ನು ಉದ್ಧಾರ ಮಾಡುತ್ತೇವೆ ಅಂತ ಗಂಟಲು ಹರಕೊಂಡು ಬೊಬ್ಬೆ ಹಾಕುವ ಸರ್ಕಾರ ಇಂತಹ ಹಳ್ಳಿಯ ಬಗ್ಗೆ ಏನು ಹೇಳುತ್ತದೆ ?

## ಬಿಹಾರದ ಹತ್ಯಾಕಾಂಡ

[ಒಂದನೇ ಪುಟದಿಂದ]

ನಾಧಾರವಾಗಿದ್ದ ಮೂವತ್ತು ವರ್ಷದ ಪತಿರಾಜಿ ಎಂಬಾತನೊಬ್ಬ.

ಅಮಾನವೀಯ ಈ ದಾಳಿಗೆ ತತ್ತರಿಸಿಹೋಗಿದ್ದ ಮಹಿಳೆಯರು ಮತ್ತು ಮಕ್ಕಳನ್ನು ಕ್ರೂರವಾಗಿ ಲಾಠಿಗಳಿಂದ ಥಳಿಸಲಾಗಿದೆಯಲ್ಲದೆ ಕೋವಿಗಳಿಂದ ತಿವಿದು ಗಾಯಗೊಳಿಸಲಾಗಿದೆ.

ತಮ್ಮ ವಶಕ್ಕೆ ಭೂಮಿ ಬಿಡದೆ ತಮ್ಮ ವಿರುದ್ಧ ತಕರಾರು ಹೂಡಿದ್ದವರ ಬಲಿಗಾಗಿ ಪೋಲೀಸರು ಮತ್ತು ಭೂಮಾಲೀಕರು ಅಂದು ರಾತ್ರಿ ಕೊನೆ ಪಕ್ಷ 18 ಸುತ್ತು ಗುಂಡುಹಾರಿಸಿದ್ದರೆಂದು ಅಲ್ಲಿನ ಹಿರಿಯ ಪೋಲೀಸ್ ಅಧಿಕಾರಿಗಳೇ ತಿಳಿಸಿದ್ದಾರೆ.

ದಾಳಿಯ ಆರಂಭದಲ್ಲಿ ಇಬ್ಬರನ್ನು ಕೊಂದ ಭೂಮಾಲೀಕರು ಮುಂಜಾನೆ ವೇಳೆಗೆ ಇನ್ನಿಬ್ಬರು ಹರಿಜನರನ್ನು ಗುಂಡಿಟ್ಟು ಕೊಂದರು.

ಭೂಮಾಲೀಕರು ಮತ್ತು ಹರಿಜನರ ನಡುವೆ ಬಹಳ ಕಾಲದಿಂದ ಇದ್ದ ಭೂವಿವಾದದ ದ್ವೇಷವೇ ಈ ಘಟನೆಗೆ ಮೂಲಕಾರಣವೆನ್ನಲಾಗಿದೆ.

ರೋಹಟ್ ಜಿಲ್ಲೆಯ ಸಬ್‌ಇನ್‌ಸ್ಪೆಕ್ಟರ್, ಅಸಿಸ್ಟೆಂಟ್ ಸಬ್‌ಇನ್‌ಸ್ಪೆಕ್ಟರೊಬ್ಬರು ತಮ್ಮ ಸಿಬ್ಬಂದಿಯೊಡನೆ ಭೂಮಾಲೀಕರ ಜತೆಗೂಡಿ ದಾಳಿಯ ಮುಖಂಡತ್ವವಹಿಸಿದ್ದರೆಂದು ಸಶಸ್ತ್ರ ಪೋಲೀಸ್ ಪಡೆಯ ಹಿರಿಯ ಅಧಿಕಾರಿಯೊಬ್ಬರು ತಿಳಿಸಿದ್ದಾರೆ.

ಸಮಾಹುಟ ಗ್ರಾಮವು ಉಪಪ್ರಧಾನಿ ಜಗಜೀವನರಾಂ ಅವರ ಸಾಸರಂ ಚುನಾವಣಾ ಕ್ಷೇತ್ರದ ವ್ಯಾಪ್ತಿಗೆ ಸೇರಿದುದು. ಇದೇ ಕ್ಷೇತ್ರಕ್ಕೆ ಸೇರಿದ ಪಿಪ್ರಿ ಎಂಬಲ್ಲಿ ಇತ್ತೀಚೆಗೆ ಹರಿಜನರಿಬ್ಬರ ಶಿರಚ್ಛೇದನ ಮಾಡಲಾಗಿತ್ತಲ್ಲದೆ ಬಾಲಕಿಯೊಬ್ಬಳನ್ನು ಗುಂಡಿಟ್ಟು ಕೊಲ್ಲಲಾಗಿತ್ತು.

# ಈ ಶೋಷಿತ ಕಾರ್ಮಿಕನ ಹೋರಾಟಕ್ಕೆ ಬನ್ನಿ

[ವರದಿ : ಎಚ್. ಗೋವಿಂದಯ್ಯ]

"ಹೋಟೆಲ್ ಮಾಲೀಕನಿಂದ ನನಗೆ 10 ವರ್ಷದ ಸಂಬಳ ಸಿಕ್ಕಿಲ್ಲ" ಎಂದುಕೊಂಡು ತನ್ನ ಬದುಕಿನ ನೋವಿನ ಕಥೆಯನ್ನು ಹೇಳಲು ಪ್ರಾರಂಭಿಸುವ ರಾಜಗೋಪಾಲ್ ಒಬ್ಬ "ನಂಬಿಕೆಯ ವ್ಯಕ್ತಿ". ನಂಬಿಕೆ ಮತ್ತು ವಿಧೇಯತೆಗಳನ್ನೇ ನಂಬಿ ಜೀವನ ವಿಡೀ ಶೋಷಣೆಯನ್ನೇ ಉಂಡು ಬೆಳೆದ 28ರ ಪ್ರಾಯದ ರಾಜು (ಗೋಪಾಲ್) ಕೇರಳದವರು. ಮೈಸೂರಿನ ಎನ್. ಆರ್. ಮೊಹಲ್ಲಾದ ದಲಿತ ವಿದ್ಯಾರ್ಥಿ ನಿಲಯದ ಎದುರಿನ ನಿತ್ಯಾನಂದ ಹೋಟೆಲ್‌ಗೆ (ಈಗ ಅದು ಹೋಟೆಲ್ ಸಂಗೀತ ಆಗಿದೆ) ಅಕ್ಕಿ ರುಬ್ಬುವವನಾಗಿ ಸೇರಿ ಹಗಲು ರಾತ್ರಿ ದುಡಿದು ಸಾವುಕಾರನನ್ನು ಬೆಳೆಸಿ ಈಗ ಅಂಥ ದುಡಿದ ಪ್ರತಿಫಲದಿಂದಲೇ ವಂಚಿತರಾಗಿರುವ ರಾಜು ಕೇರಳದಿಂದ ಮೈಸೂರಿಗೆ ಬಂದದ್ದೇ ಒಂದು ನೋವಿನ ಕಥೆ

**ಕೆಲಸ ಸಿಕ್ಕಿತು**

ತಂದೆ ತಾಯಿಗಳ ಪ್ರೀತಿಯಿಂದ ವಂಚಿತರಾದ ರಾಜು 9ನೇ ವಯಸ್ಸಿನಲ್ಲೇ ಬೀದಿ ಪಾಲಾಗಬೇಕಾಯಿತು. ಕಲ್ಲಿಕೋಟೆಯ ಬಸ್‌ಸ್ಟ್ಯಾಂಡಿನಲ್ಲಿ ಅದೂ ಇದೂ ಮಾಡಿ ಹೊಟ್ಟೆ ಹೊರೆಯುತ್ತಿದ್ದಾಗ ಪರಿಚಯವಾದ ಒಬ್ಬರು ಒಂದು ಮನೆಯಲ್ಲಿ ಕೆಲಸಕ್ಕೆ ಸೇರಿಸಿದರು. ಬದುಕಿನಲ್ಲಿ ಹೊಸ ಬೆಳಕು ಕಂಡಂತೆ ಖುಷಿಗೊಳ್ಳುವಷ್ಟರಲ್ಲಿ ನಿರಾಶೆಯಾಯಿತು. ಆ ಮನೆ ಒಂದು ಸೂಳೆಗಾರಿಕೆ ಕೇಂದ್ರವಾಗಿದ್ದು ಅನೇಕ ಕಿರುಕುಳದ ಜೊತೆಗೆ ಪೋಲೀಸ್ ವಿಚಾರಣೆಗಳನ್ನೂ ಎದುರಿಸಬೇಕಾಯಿತು. ಅಲ್ಲಿನ ಸ್ಥಿತಿ ಕಿರುಕುಳ ಸಹಿಸಲಾರದೆ 3 ವರ್ಷಗಳ ನಂತರ ಪೇಟೆಗೆ ಹೋಗುವ ನೆಪದಲ್ಲಿ ಒಂದು ದಿನ ಕಾಣೆಯಾದ ರಾಜು 'ನರಕ'ದಿಂದ ಬಿಡಿಸಿಕೊಂಡದ್ದಕ್ಕೆ ಖುಷಿಪಟ್ಟರೂ ಜೀವನೋಪಾಯದ ದಾರಿಕಾಣದೆ ಮೈಸೂರಿನ ಬೀದಿಬೀದಿ ಅಲೆಯಬೇಕಾಯಿತು. ಹೀಗೆ 1968ರ ಡಿಸೆಂಬರ್ ತಿಂಗಳಲ್ಲಿ ಎನ್. ಆರ್. ಮೊಹಲ್ಲಾದ ಬೀದಿಯೊಂದರಲ್ಲಿ ನಡೆಯುತ್ತಿದ್ದಾಗ 'ಹೋಟೆಲ್ ನಿತ್ಯಾನಂದ' ಕಾಣಿಸಿತು. 'ವಿಚಾರಿಸಲಾಗಿ ಅಕ್ಕಿರುಬ್ಬುವ ಕೆಲಸ ಸಿಕ್ಕಿತು.

ಅಂದಿನಿಂದ ಮಾಲೀಕನ ಅಚ್ಚು ಮೆಚ್ಚಿನ ಕೆಲಸಗಾರನಾದ ರಾಜು ಹಗಲು ರಾತ್ರಿಯೆನ್ನದೆ ದುಡಿಯು ತೊಡಗಿದರು. ಹೋಟೆಲಲ್ಲಿ ನಲ್ಲಿ ಇಲ್ಲದ್ದರಿಂದ ದೂರದಿಂದ ಹೋಟೆಲಿಗಾಗುವಷ್ಟು ನೀರನ್ನು ಒಬ್ಬರೇ ಎಳೆಯಬೇಕಾಯಿತು ಸರಿಯಾಗಿ ಸಂಬಳ ಕೊಡುತ್ತಿರಲಿಲ್ಲವಾಗಿ ಕೆಲಸಗಾರರಾರೂ ಸರಿಯಾಗಿ ಬರುತ್ತಿರಲಿಲ್ಲವಾದ್ದರಿಂದ ಎಲ್ಲಾ ಕೆಲಸವೂ ರಾಜು ಮೇಲೆಯೇ ಬೀಳುತ್ತಿತ್ತು. ಸಂಬಳಕ್ಕಾಗಿ ಹಾತೊರೆಯದೆ ಎಲ್ಲಾ ಕೆಲಸವನ್ನೂ ಹೆಗಲ ಮೇಲೆ ಹಾಕಿಕೊಂಡು ದುಡಿದ ಪ್ರತಿಫಲವಾಗಿ ಹೋಟೆಲ್ ದಿನೇದಿನೇ ಚೇತರಿಸಿಕೊಳ್ಳತೊಡಗಿತು. ದಿನಕ್ಕೆ ನೂರು ರೂ. ವ್ಯಾಪಾರ ಕುದುರಿಸಿ ಈಗ 500 ರೂ. ವರೆಗೆ ವ್ಯಾಪಾರವಾಗ ತೊಡಗಿತು.

**'ಈಗೇನು ಅರ್ಜೆಂಟು'**

ವಾರಕ್ಕೆ 2 ರೂ. ಅಷ್ಟೆಯೇ ಖರ್ಚಿಗೆ ಕೊಡುತ್ತಿದ್ದ ಮಾಲೀಕರನ್ನು ಸಂಬಳ ಕೇಳಲಾಗಿ 'ಈಗೇನು ಅರ್ಜೆಂಟು' 'ಒಟ್ಟಿಗೆ ಈಸಿಕೊ' 'ನಾನೇ ಬೇಕಾದರೆ ಬ್ಯಾಂಕಲ್ಲಿ ಇಟ್ಟಿರುತ್ತೇನೆ' ಇತ್ಯಾದಿ ಹೇಳಿ ಸುಮ್ಮನಾಗಿಸ ತೊಡಗಿದರು. ತಂದೆ ತಾಯಿ ಮನೆಮಠಗಳನ್ನು ಕಳೆದುಕೊಂಡಿದ್ದ ರಾಜು 'ಒಟ್ಟಿಗೆ ಇರಲಿ, ಆಮೇಲೆ ಈಸಿಕೊಂಡರಾಯಿತು' ಎಂದುಕೊಂಡು ಮಾಲೀಕರನ್ನು ನಂಬಿ ಅವರಿಗೆ ವಿಧೇಯರಾದರು. ಆದರೆ ನಂಬಿಕೆ ಮತ್ತು ವಿಧೇಯತೆಗಳೇ ತಿರುಗುಬಾಣವಾಗುವುದೆಂದು ರಾಜು ಎಂದೂ ಭಾವಿಸಿರಲಿಲ್ಲ.

1978ರ ಡಿಸೆಂಬರ್‌ನಲ್ಲಿ ಉಷಾರಿಲ್ಲದೆ ಮಲಗಿದ್ದಾಗ ಒಂದುದಿನ ಇದ್ದಕ್ಕಿದ್ದಂತೆ ಮಾಲೀಕರು "ನಿನಗೆ ಕ್ಲೀನರ್ ಕೆಲಸ ಮಾತ್ರ ಕೊಡುವುದು. ಇಷ್ಟವಿದ್ದರೆ ಮಾಡು, ಇಲ್ಲದಿದ್ದರೆ ಹೊರಡು" ಎನ್ನತೊಡಗಿದರು. ಆಶ್ಚರ್ಯಗೊಂಡ ರಾಜು "ಏಕೆ ಹೀಗೆ" ಎಂದರೂ ಸರಿಯಾದ ಉತ್ತರ ಸಿಕ್ಕಲಿಲ್ಲ. ಗದರಿಸ ತೊಡಗಿದರು. "ನನ್ನ ಲೆಕ್ಕವಾದರೂ ತೀರಿಸಿ ಬಿಡಿ ಹೋಗುತ್ತೇನೆ" ಎಂದಾಗ ಒಂದು ತಿಂಗಳ ಸಮಯ ಕೇಳಿದರು.

**ಮತ್ತೆ ಬೀದಿಪಾಲು**

ಅಂದಿನಿಂದ ಮೈಸೂರಿನಲ್ಲಿ ಮತ್ತೆ ಬೀದಿಪಾಲಾದ ರಾಜಗೋಪಾಲ್ ಒಂದು ತಿಂಗಳ ನಂತರ ಲೆಕ್ಕ ಕೇಳಲು ಹೋಗಲಾಗಿ "ನಾಳೆಬಾ" ಹೇಳತೊಡಗಿದರು. ಹೀಗೆ 3 ತಿಂಗಳು ಸತಾಯಿಸಿದ ನಂತರ "ನೀನು ಒಟ್ಟು 4200 ರೂ. ದುಡಿದಿದ್ದೀಯ. ಇದರಲ್ಲಿ 2700 ರೂ. ಅನ್ನು ನೀನು ಆಗಾಗ್ಗೇ ಈಸಿಕೊಂಡಿದ್ದೀಯ. ಉಳಿದದ್ದು 1500 ಆಮೇಲೆ ಕೊಡುತ್ತೇನೆ ಹೋಗು"-ಎಂದರು ಲೆಕ್ಕ ತಿಂಗಳಿಗೆ 35 ರೂ. ನಂತೆ ಹಾಕಿ (ಕಾನೂನಿನ ಪ್ರಕಾರ 90 ರೂ.) ಅದರಲ್ಲಿ 2700 ರೂ. ಅನ್ನು ಸುಳ್ಳು ಲೆಕ್ಕ ಹಾಕಿ ಕಳೆಯಲಾಗಿತ್ತು.

ಈ ವಿಷಯವನ್ನು ಮೈಸೂರಿನ ಹೋಟೆಲ್ ಕಾರ್ಮಿಕರ ಸಂಘದ ಅಧ್ಯಕ್ಷರಿಗೆ ತಿಳಿಸಿ ಏನಾದರೂ ಮಾಡುವಂತೆ ಕೇಳಿಕೊಂಡರು. ಯೂನಿಯನ್ನಿನ ಕೆಲವರು ಬಂದು ಸಧ್ಯಕ್ಕೆ 1500 ರೂಪಾಯಿಯನ್ನಾದರೂ ಯಾವಾಗ ಕೊಡುತ್ತೀರಿ ಎಂದು ಮಾಲಿಕನನ್ನು ಕೇಳಲಾಗಿ "ಇವನು ಕೆಲಸ ಮಾಡಿದ್ದಾನೆ ಎನ್ನುವುದಕ್ಕೆ ಆಧಾರವಿದೆಯೇ ? ಇವನು ಕೆಲಸ ಮಾಡಿಯೇ ಇಲ್ಲ" ಎಂದು ರೇಗಾಡಿದರು. ನಂತರ ನ್ಯಾಯ ದೊರಕಿಸಿಕೊಳ್ಳುವ ಆಸೆಯಿಂದ ರಾಜು ಈ ವಿಷಯವನ್ನು ಮೈಸೂರಿನ ಲೇಬರ್ ಆಫೀಸಿನ ಇನ್ಸ್‌ಪೆಕ್ಟರಿಗೆ ತಿಳಿಸಿ ಅರ್ಜಿಕೊಟ್ಟು 10 ವರ್ಷದ ಸಂಬಳ ಕೊಡಿಸುವಂತೆ ಕೇಳಿಕೊಂಡರು.

ಆದರೆ ಮಾಲೀಕನೊಂದಿಗೇ ಷಾಮೀಲಾದ ಲೇಬರ್ ಇನ್ಸ್‌ಫೆಕ್ಟರು" 40Oರೂ. ಕೋಡಿಸುತ್ತೇನೆ ಸುಮ್ಮನೆ ಒಪ್ಪಿಕೊ" ಎಂದರು. ತಾನು 10 ವರ್ಷ ಕೆಲಸ ಮಾಡಿರುವುದಕ್ಕೆ ಅನೇಕ ಲಿಖಿತ ಮಾಹಿತಿಗಳನ್ನ ರಾಜು ತೋರಿಸಿದಾಗ್ಯೂ ಸಹ ಲೇಬರ್ ಇನ್ಸ್‌ಪೆಕ್ಟರು ಅದನ್ನು ಗಮನಿಸಲಿಲ್ಲ. ಅಂತೆಯೇ ಲೇಬರ್ ಆಫೀಸರ್ ಕೂಡ ಮಾಲೀಕನ ಜತೆಗೂಡಿ ರಾಜು ಅವರ ಮನವಿಯನ್ನು ತಳ್ಳಿಹಾಕಿದರು.

**ಹೆಸರು ಬದಲಾವಣೆ**

ಈ ಮಧ್ಯೆ 5-3-79 ರಂದು ಹೋಟೆಲ್ ಮಾಲೀಕ ತಾನು ಪಾಪರಾದೆ ಎನ್ನುವ ನೆಪದಲ್ಲಿ ಹೋಟೆಲನ್ನು ಬೇರೆಯವರ ಮ್ಯಾನೇಜ್‌ಮೆಂಟಿಗೆ

(ಕಡೆಯ ಪುಟ ನೋಡಿ)

# ಪಿರಿಯಾಪಟ್ಟಣದಲ್ಲಿ ದಲಿತ ಸಂಘರ್ಷ ಸಮಿತಿ ಶಾಖೆ ಆರಂಭ

ವರದಿ : **ದೊಡ್ಡಣ್ಣ**

ಮೈಸೂರು ಜಿಲ್ಲೆ ಪಿರಿಯಾಪಟ್ಟಣದಲ್ಲಿ ಜೂನ್ 30 ರಂದು ದಲಿತ ಸಂಘರ್ಷ ಸಮಿತಿಯ ತಾಲ್ಲೂಕು ಶಾಖೆಯೊಂದನ್ನು ಪ್ರತಿಭಟನಾ ಪ್ರದರ್ಶನ ನಡೆಸುವ ಮೂಲಕ ಆರಂಭಿಸಲಾಯಿತು.

ತಾಲ್ಲೂಕಿನ ಸುತ್ತಮುತ್ತಲ ಅನೇಕ ಗ್ರಾಮುಗಗಳಿಂದ ಬಂದಿದ್ದ ನೂರಾರು ಮಂದಿ ದಲಿತರು ತಮ್ಮ ಮೇಲಿನ ಎಲ್ಲಾ ರೀತಿಯ ದಬ್ಬಾಳಿಕೆ, ಅನ್ಯಾಯಗಳ ವಿರುದ್ಧ ಊರಿನ ಪ್ರಮುಖ ಬೀದಿಗಳಲ್ಲಿ ಪ್ರದರ್ಶನ ನಡೆಸಿ ಪ್ರತಿಭಟಿಸಿದರು.

ಭೂಮಾಲಿಕರಿಂದ ದಲಿತರ ಜಮೀನು ಅಕ್ರಮ, ಕಿರುಕುಳ, ಹಲ್ಲೆ ಮುಂತಾದ ಸಮಸ್ಯೆಗಳ ಬಗ್ಗೆ ಸರ್ಕಾರದ ಗಮನ ಸೆಳೆಯಲು ತಹಸಿಲ್ದಾರ್‌ರವರಿಗೆ ಮನವಿಯೊಂದನ್ನು ಸಲ್ಲಿಸಲಾಯಿತು.

ಮೆರವಣಿಗೆ ನಂತರ ರಾಜ್ಯ ದಲಿತ ಸಂಘರ್ಷ ಸಮಿತಿಯ ಮೈಸೂರು ವಿಭಾಗದ ಸಂಚಾಲಕ ದೇವನೂರ ಮಹಾದೇವ ಅವರು ಸಂಘರ್ಷ ಸಮಿತಿ ಶಾಖೆಯನ್ನು ಉದ್ಘಾಟಿಸಿದರು. ಲಿಂಗರಾಜು ಹೆಬ್ಬಾಲೆ ಅವರು ಅಧ್ಯಕ್ಷತೆ ವಹಿಸಿದ್ದರು. ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರಾದ ಲಕ್ಷ್ಮೀನಾರಾಯಣ, ಎನ್. ವೆಂಕಟೇಶ್, ದೇವಯ್ಯಹರವೆ, ಹರಿಹರಾನಂದ ಸ್ವಾಮಿ ಅವರು ದಲಿತರ ಸಮಸ್ಯೆ ಮತ್ತು ಅವರ ಮೇಲಿನ ದಬ್ಬಾಳಿಕೆ ಕುರಿತು ಮಾತನಾಡಿದರು.

## ಶೋಷಿತ ಕಾರ್ಮಿಕನ ಹೋರಾಟ

(5ನೇ ಪುಟದಿಂದ)

ವರ್ಗಾಯಿಸಿ ನಿತ್ಯಾನಂದ ಹೋಟೆಲ್ ಎನ್ನುವ ಬೋರ್ಡನ್ನು "ಹೋಟೆಲ್ ಸಂಗೀತಾ" ಎಂದು ಬದಲಾಯಿಸಿದರು. 10 ವರ್ಷದ ಸಂಬಳದ ಹೊರೆಯಿಂದ ತಪ್ಪಿಸಿಕೊಳ್ಳಲು ನೋಡಿದರು. (ಹೋಟೆಲ್ ಆಡಳಿತದಲ್ಲಿ ಇಂಥ ಸಮಸ್ಯೆ ಇರುವಾಗ ಮ್ಯಾನೇಜ್‌ಮೆಂಟನ್ನು ಬದಲಿಸಕೂಡದು ಎಂದು ಕಾನೂನಿದೆ.)

**ಕೊನೆತನಕ ಹೋರಾಟ**

ಕಾರ್ಮಿಕರ ಹಿತಾಸಕ್ತಿ ಕಾಪಾಡುವುದಕ್ಕಾಗಿಯೇ ಇರುವ ಲೇಬರ್ ಆಫೀಸಿನಲ್ಲೂ ನಡೆಯುತ್ತಿರುವ ಇಂಥ ಪಿತೂರಿಯನ್ನು ಮನಗಂಡ ರಾಜು ಲೇಬರ್ ಆಫೀಸರ ಪುಸಲಾವಣೆಗೆ ಒಪ್ಪದೆ ಹೊರ ಬಂದಿದ್ದಾರೆ. ತಂದೆ ತಾಯಿ, ಮನೆಮಠ ಕಳೆದುಕೊಂಡು ಈಗ ಸತತ 10 ವರ್ಷದ ದುಡಿತದ ಪ್ರತಿಫಲದಿಂದಲೂ ವಂಚಿತರಾಗಿರುವ ರಾಜಗೋಪಾಲ್ ಅವರಿಗೆ ನ್ಯಾಯ ದೊರಕಿಸುವ ಹೊಣೆಗಾರಿಕೆ ಮಾನವೀಯತೆಗಾಗಿ ಹೋರಾಡುತ್ತಿರುವ ಅನೇಕ ಸಂಘ, ಸಂಸ್ಥೆ ಸಂಘಟನೆಗಳ ಮೇಲೆ ಬಿದ್ದಿದೆ. ಸಾವುಕಾರನನ್ನು ನಂಬಿ ಮೋಸ ಹೋಗಿರುವ ರಾಜು ಕೂಡ ಈಗ ಹೇಳುತ್ತಾರೆ. "ಇಂಥ ಅನ್ಯಾಯದ ವಿರುದ್ಧ ನನ್ನಂಥ ಅನೇಕರ ಜೊತೆ ಸೇರಿಕೊಂಡು ಕೊನೆತನಕ ಹೋರಾಡಲು ನಾನು ನಿರ್ಧರಿಸಿದ್ದೇನೆ".

## ತಮಿಳುನಾಡಿನಲ್ಲಿ ಐವರ ಕೊಲೆ

[ಒಂದನೇ ಪುಟದಿಂದ]

ಹರಿಜನರು ಉತ್ಸವ ನಡೆಸದಂತೆ ಗಟ್ಟಿಮನಸ್ಸು ಮಾಡಿ ನಿರ್ಧರಿಸಿದ್ದ 'ದೇವರ್' ಜಾತಿಜನ ಹರಿಜನರನ್ನು ಮುಗಿಸೇಬಿಡುವ ಅಂತಿಮ ನಿರ್ಧಾರಕ್ಕೆ ಬಂದರು. ಅಂತಯೇ ಕತ್ತಿಹಿಡಿದು ಕಾಳಗಕ್ಕೆ ಹೊರಟಂತೆ ಹರಿಜನರ ಕೇರಿಗೆ ನುಗಿ ದೌರ್ಜನ್ಯ ಎಸಗಿದರು. 'ದೇವರ್'ಗಳ ಆಯುಧಗಳಿಂದ ಇರಿತ, ಹೊಡೆತಗಳಿಗೆ ಬಲಿಯಾದ ನತದೃಷ್ಟ ಹರಿಜನರೆಂದರೆ ಕುಲಂದೇಯನ್ (50), ಮುನಿಯಾಂಡಿ (30), ಪೆರಿಯಯ್ಯ (25), ತೇರಡಿಯನ್ (50) ಮತ್ತಿಬ್ಬರು.

## ಸಾಮಾಜಿಕ ಬಹಿಷ್ಕಾರ

[3ನೇ ಪುಟದಿಂದ]

"ನೀವು ತರೋ ದಂಡು ತಗಂಬನ್ನಿ 10 ಲಕ್ಷ ಖರ್ಚಾಗಲಿ ನಾವು ನೋಡುತ್ತೇವೆ" ಎಂದು ಸವಾಲು ಹಾಕಿದರು. ವಿಷಯ ತಿಳಿದ ಸಂಘರ್ಷ ಸಮಿತಿ ಸದಸ್ಯರು ವೆಂಕಟಪ್ಪನವರ ಕುಟುಂಬದವನ್ನೊಳಗೊಂಡು ಪೋಲೀಸಿಗೆ ದೂರು ನೀಡಿ "ದಲಿತ ಕುಟುಂಬಕ್ಕೆ ರಕ್ಷಣೆ ಕೊಟ್ಟು ಅವರು ಬೋರ್‌ವೆಲ್‌ನಲ್ಲಿ ನೀರು ಬಳಸುವ ವ್ಯವಸ್ಥೆಯಾಗಬೇಕೆಂದೂ, ದೌರ್ಜನ್ಯ ಮಾಡಿದವರಿಗೆ ಶಿಕ್ಷೆಯಾಗಬೇಕೆಂದು ಒತ್ತಾಯಿಸಿದ್ದಾರೆ.



ಪ್ರಿಯ ಓದುಗರೇ,

ನೀವು ನಿಮ್ಮ ಊರುಗಳಲ್ಲಿ ಅನುಭವಿಸುವ, ಕಾಣುವ ದಲಿತರ ಮೇಲಿನ ದೌರ್ಜನ್ಯ, ದಬ್ಬಾಳಿಕೆ, ಮುಂತಾದ ಅನ್ಯಾಯಗಳ ಬಗ್ಗೆ ಮತ್ತು ಪ್ರಗತಿಪರ ವಿಚಾರಗಳನ್ನು ಕುರಿತ ಲೇಖನ-ಸುದ್ದಿಗಳನ್ನು ಕಳುಹಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ 'ಪಂಚಮ'ವನ್ನು ನಿಮ್ಮ ದನಿಯನ್ನಾಗಿಸಿಕೊಳ್ಳಿ. ನಿಮ್ಮ ಲೇಖನ-ಸುದ್ದಿ ಸಾಕಷ್ಟು ಚಿಕ್ಕದಾಗಿ, ನಿಖರವಾಗಿ ಇರಲಿ. ಬರಹ ಪ್ರತಿಯಲ್ಲಿ ನಿಮ್ಮ ಪೂರ್ಣ ವಿಳಾಸ ಇರತಕ್ಕದ್ದು

—ಸಂಪಾದಕ

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ : 5ಎ ವಾಣಿ ವಾಣಿಜ್ಯಶಾಲಾ, ಪತ್ರಕರ್ತರ-ಕಾಲೋನಿ. ಬೆಂಗಳೂರು-560002.